# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 654
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 04.03.2021
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು

| ಕ್ರ. ಸಂ | ಚುಕ್ಕೆ ಗುರುತಿಲ್ಲದ ಪ್ರಶ್ನೆ | ಉತ್ತರ |
|---|---|---|
| ಅ | ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಹಳೇ ದಿಗ್ಗೇವಾಡಿ ಗ್ರಾಮವು ಕೃಷ್ಣಾ ನದಿಗೆ ಅತಿ ಸಮೀಪದಲ್ಲಿದ್ದು, ಪ್ರತಿ ವರ್ಷ ಮಳೆಗಾಲದ ಸಂದರ್ಭದಲ್ಲಿ ಪ್ರವಾಹಕ್ಕೀಡಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ? | ಬಂದಿದೆ |
| ಆ | ಬಂದಿದ್ದಲ್ಲಿ, ಕಳೆದ ಮೂರು ವರ್ಷಗಳ ಅವಧಿಯಲ್ಲಿ ಈ ಪ್ರವಾಹದಿಂದ ಆದ ಆಸ್ತಿ – ಪಾಸ್ತಿಗಳ ಹಾನಿಯ ವಿವರ ಒದಗಿಸುವುದು; | ಕಳೆದ ಮೂರು ವರ್ಷಗಳಲ್ಲಿ 195.09 ಹೆಕ್ಟೇರ್ ಪ್ರದೇಶದಲ್ಲಿ ಬೆಳೆ ಹಾನಿಯಾಗಿದ್ದು, ಪರಿಹಾರ ತಂತ್ರಾಂಶದಲ್ಲಿ ದಾಖಲಿಸಲಾಗಿದೆ. ರೈತರಿಗೆ ಪರಿಹಾರ ಧನವನ್ನು ಸರ್ಕಾರದಿಂದ ನೇರವಾಗಿ ಪರಿಹಾರ ತಂತ್ರಾಂಶದ ಮೂಲಕ ಜಮೆ ಮಾಡುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.<br><br>362 ಮನೆಗಳ ಹಾನಿಯ ಕುರಿತು ರಾಜೀವ ಗಾಂಧಿ ವಸತಿ ನಿಗಮ ನಿಯಮಿತ ತಂತ್ರಾಂಶದಲ್ಲಿ ದಾಖಲಿಸಲಾಗಿದೆ. ನಿಗಮದ ವತಿಯಿಂದ ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಹಂತವಾರು ಪರಿಹಾರ ಒದಗಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |
| ಇ | ಪ್ರತಿ ವರ್ಷ ಪ್ರವಾಹ ಪರಿಸ್ಥಿತಿ ಎದುರಿಸುತ್ತಿರುವ ಈ ಗ್ರಾಮವನ್ನು ಶಾಶ್ವತವಾಗಿ ಸ್ಥಳಾಂತರಿಸುವ ಉದ್ದೇಶ ಸರ್ಕಾರಕ್ಕಿದೆಯೇ ; | ಪ್ರಸ್ತುತ ಇಂತಹ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಈ | ಹಾಗಿದ್ದಲ್ಲಿ, ಈ ಯೋಜನೆಯ ರೂಪುರೇಷೆಗಳೇನು ; ಹಾಗೂ ಯಾವ ಕಾಲಮಿತಿಯಲ್ಲಿ ಇದನ್ನು ಪೂರ್ಣಗೊಳಿಸಲಾಗುವುದು ? (ಸಂಪೂರ್ಣ ವಿವರ ನೀಡುವುದು) | |

*ಕಂಇ 88 ಟಿಎನ್‌ಆರ್ 2021*

**(ಆರ್. ಅಶೋಕ)**
ಕಂದಾಯ ಸಚಿವರು